











ಮುಖಪುಟ: ಜೀರ್ಜಿಂಬೆ, ಕಕ್ಕೆ ದುಂಬಿ .

ಇ-ಅಂಚೆ.:kaanana.mag@gmail.com

ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.





# ಸಂಪಾದಕೀಯ

ಕರ್ನಾಟಕದಲ್ಲಿ ನರಭಕ್ಷಕ ಹುಲಿಗಳ ಕಾಟ ಹೆಚ್ಚಾಗಿ ಮಾನವ ವನ್ಯಜೀವಿ ಸಂಘರ್ಷ ಹೆಚ್ಚುತ್ತಿದೆ.  ಕಳೆದ ತಿಂಗಳಲ್ಲಿ ಸಂಭವಿಸಿದ ದುರಂತಗಳನ್ನು ಗಮನಿಸೋಣ . ರಾಷ್ಟ್ರಪ್ರಾಣಿಯನ್ನು ಗುಂಡಿಕ್ಕಿ ಕೊಂದಿದ್ದಾಯಿತು. ಮೈಸೂರಿನ ಬಳಿ ಊರಿಗೆ ಬಂದ ಕರಡಿಯನ್ನು ಹಿಡಿದು ಪಾರ್ಕ್ ನ ಬೋನಿಗೆ ಹಾಕಿದ್ದಾಯಿತು.  ಇನ್ನು ಕಾಡಾನೆಗಳೋ ಕರಂಟಿಗೆ ಸಿಕ್ಕಿ ಸತ್ತಿವೆ. ಮಾನವ - ವನ್ಯಜೀವಿ ಸಂಘರ್ಷ ಹೆಚ್ಚುತ್ತಿದೆ.

ಹುಲಿ ಸಂರಕ್ಷಣೆಯಲ್ಲಿ ಮಾನವನ ತಪ್ಪಿನಿಂದಾಗಿ  ವಿಜ್ಞಾನವೇ ಸೋತಂತಾಗಿದೆ.  ಹಳೆಕಾಲದ ಹುಲಿಶಿಕಾರಿಗೂ ಆಧುನಿಕ ಯುಗದ ಹುಲಿ ಸಂರಕ್ಷಣೆಗೂ ವ್ಯತ್ಯಾಸ ಕಾಣುತ್ತಿಲ್ಲ .  ಸತ್ತ ಹುಲಿಯ ಜೊತೆ ನಿಂತು ಪೋಸು ಕೊಡಲು ತಾ ಮುಂದು ನಾ ಮುಂದು ಎಂದು ಪೈಪೋಟಿ ಉಂಟಾದಂತಿದೆ. ಹುಲಿಗೆ  ನಿಜವಾಗಿ ಯಾರು ಗುಂಡಿಕ್ಕಿದವರು ಯಾರು ಎಂದು  ಗೊಂದಲಗಳಿದ್ದಿವೆ. ಸಂರಕ್ಷಣೆಗೆ ರಾಜಕೀಯ ಬೆರೆತರೆ ಉಂಟಾಗು ವರ್ಣ ವೈವಿದ್ಯತೆಯಲ್ಲಿ ಕಾಡುಪ್ರಾಣಿಗಳಿಗೆ ಉಂಟಾಗುವ ದುರ್ಗತಿಗೆ ಖಾನಪುರದ ಹುಲಿಯ ಸಾವು ಒಂದು ನಿದರ್ಶನ.

WILDLIFE
CONSERVATION
GROUP



# ಚಿಟ್ಟೆ ಲೋಕ

**–ಕಾಮನ್ ಬುಷ್ ಬರ್ನ್**

ವೀಕೆಂಡ್ ಬಂತೆದರೆ ಮೋಜಿನಲ್ಲಿ ತೊಡಗಿರುವ ಈಗಿನ ಯುವ ಜನತೆಯಲ್ಲಿ ನಮ್ಮ ಕಾರ್ತಿಕ್ ಮಾತ್ರ ಹೊರತು. ಏಕೆಂದರೆ ವಾರಾಂತ್ಯಗಳಲ್ಲಿ ಹೆಗಲಿಗೆ ಕ್ಯಾಮರಾ ಏರಿಸಿ ಕಾಡು ಮೇಡು ಅಲೆಯುತ್ತಾ ಸಿಗುವ ಕ್ರಿಮಿಕೀಟಗಳನ್ನು ತನ್ನ ಕ್ಯಾಮರಾ ಕಣ್ಣಿನಿಂದ ಸೆರೆಹಿಡಿಯುತ್ತಾರೆ. ಹೀಗೆ ಮೊನ್ನೆ ನಮ್ಮೂರಿಗೆ ಬಂದಿದ್ದ ಕಾರ್ತಿಕ್ ರಾತ್ರಿ ಸುತ್ತಲು ಹೋದರೆ ಕಪ್ಪೆ ಗಳನ್ನು ನೋಡ ಬಹುದು ಎಂದ. ಅದಕ್ಕೆ ಸಮ್ಮತಿಸಿದ ನಾವು ಅವರನ್ನು ನಮ್ಮೊಂದಿಗೆ ಕರೆದುಕೊಂಡು ನಮ್ಮೂರಿನ ಕಂಟಪ್ಪನ ಕೆರೆಯ ಹತ್ತಿರ ಹೋದೆವು. ಅಶ್ವಥ್ಥಣ್ಣ ತನ್ನ ಮೈಕ್ರೋಸ್ಕೋಪ್ ಕಣ್ಣುಗಳಿಂದ ಕತ್ತಲಲ್ಲೂ ಸಣ್ಣ ಸಣ್ಣ ಕೀಟಗಳನ್ನು ತೋರಿಸುತ್ತಿದ್ದದ್ದು ವಿಶೇಷವಾಗಿತ್ತು. ಅವರು ತೋರಿಸಿದ ಎಲ್ಲವನ್ನು ತರಾವರಿ ಪೋಸುಗಳಲ್ಲಿ ಕಾರ್ತಿಕ್ ಅವರ ಕ್ಯಾಮರಾ ಕಣ್ಣಿನ ಸೆರೆಹಿಡಿಯುತ್ತಿದ್ದರು. ಮುಂದೆ ಸಾಗುತ್ತಾ ಹೋದಾಗ ಅಲ್ಲೊಂದು ಸಣ್ಣ ಕಲ್ಲಿನ ಮೇಲೆ ಎರಡು ಚೇಳು ಜಾತಿಯ ಚಾವಟಿ ಚೇಳು ತನ್ನ ಸಂಗಾತಿಯನ್ನು ಸರಸ ಸಲ್ಲಾಪಕ್ಕೆ ಆಹ್ವಾನಿಸುತ್ತಿತ್ತು ಎನ್ನಿಸುತ್ತದೆ ಆದರೆ ಕ್ಯಾಮರಾದ ಪ್ಲಾಷ್ ಲೈಟ್ ಗೆ ಅವುಗಳಿಗೆ ಏನನ್ನಿಸಿತೋ ಏನೋ ಅವು ತಟಸ್ಥವಾಗಿ ಬಿಟ್ಟವು. ಅದನ್ನೆಲ್ಲ ತನ್ನ ಕ್ಯಾಮರದಲ್ಲಿ ಸೆರೆ ಹಿಡಿಯುತ್ತಿದ್ದ ಕಾರ್ತಿಕ್ ನನ್ನು " ಲೋ ಮಾರಾಯ ಇಲ್ನೋಡೋ ಚಿಟ್ಟೆ ನಿದ್ದೆ ಮಾಡ್ತಾ ಇದ್ದಂಗಯ್ತೆ". ಎಂದು ಅಷ್ಟು ದೂರದಲ್ಲಿ ಅಶ್ವಥ್ಥಣ್ಣ ಕರೆದರು. ಹೋಗಿ ನೋಡಿದಾಗ ಕತ್ತಲಲ್ಲಿ ಯಾವ ಚಿಟ್ಟೆ ಎಂದು ಗೊತ್ತಗಲಿಲ್ಲ. ಕೈಲಿದ್ದ ಟಾರ್ಚ್ ಲೈಟ್ ಹಾಕಿ ನೋಡಿದಾಗಲೇ ತಿಳಿದಿದ್ದು ಅದು "ಕಾಮನ್ ಬುಷ್ ಬರ್ನ್ " ಎಂದು .

ಸಾಮಾನ್ಯವಾಗಿ ಈ ಚಿಟ್ಟೆಗಳು ದಕ್ಷಿಣ ಏಷ್ಯಾದಲ್ಲಿ ಕಾಣಸಿಗುತ್ತವೆ. ಭಾರತ,ಶ್ರೀಲಂಕಾ.ಮಯನ್ಮಾರ್, ಬಾಗ್ಲಾದೇಶ್, ಪಾಕೀಸ್ಥಾನ ಗಳಲ್ಲಿ ಹೆಚ್ಚಾಗಿ ನೋಡಬಹುದು. ನೆಲಮಟ್ಟದಲ್ಲಿ ಹೆಚ್ಚಾಗಿ ಹಾರಡಬಲ್ಲ ಈ ಚಿಟ್ಟೆಗಳು ಕೊಳೆತ ಹಣ್ಣುಗಳು, ಜಾನುವಾರುಗಳ ಸಗಣಿ, ಇವುಗಳ ಮೇಲೆ ಹೆಚ್ಚಾಗಿ ಕೂರುತ್ತವೆ. ಮತ್ತು ಗಂಡು ಚಿಟ್ಟೆಗಳು ನೀರಿನ ಆಕರಗಳ ಬಳಿ ಕಾಣಸಿಗುತ್ತವೆ. ಈ ಚಿಟ್ಟೆಗಳು ಬೆಳಗಿನ ಸಮಯ ಹಾಗೂ ಸಂಜೆ ಹೆಚ್ಚಾಗಿ ಕಾರ್ಯೋನ್ಮುಖವಾಗಿರುತ್ತವೆ. ಇವುಗಳ ರೆಕ್ಕೆ ಮೇಲ್ಭಾಗ ಅಚ್ಚ ಬೂದು ಬಣ್ಣವಿದ್ದು ,ರೆಕ್ಕೆಗಳ ಮಧ್ಯ ಭಾಗದಲ್ಲಿ ಬಿಳಿಯ ಪಟ್ಟೆ ಇರುತ್ತವೆ. ಹಾಗೂ ಕಣ್ಣಿನಾಕಾರದ ಗುರುತುಗಳು ರೆಕ್ಕೆಯ ತುದಿಯಲ್ಲಿರುತ್ತವೆ. ಹಾಗೂ ಗಂಡು ಚಿಟ್ಟೆಗಳ ಮೇಲ್ಭಾಗದ ರೆಕ್ಕೆಗಳ ಮೇಲೆ ಕಪ್ಪು ಬಣ್ಣದ ಚುಕ್ಕೆಗಳಿರುತ್ತವೆ . ಈ ಚಿಟ್ಟೆಗಳು 1700 ಮೀ ಎತ್ತರದಲ್ಲೂ ಕಾಣಿಸಿರುವುದು ವಿಶೇಷವಾಗಿದೆ.



-

**ಮಹಾದೇವ K C.**




ಕಾಡಿಗೆ ಅಂಟಿಕೊಂಡೇ  ಇರುವ ಕೊರಮರದೊಡ್ಡಿಯಿಂದ ನಮ್ಮ ಶಾಲೆಗೆ ಬರುತ್ತಿದ್ದ ಏಕೈಕ ವಿದ್ಯಾರ್ಥಿ ಸಣ್ಕಾಳ. ಗುಂಗುರು ಕೂದಲಿನ ಅಪ್ಪಟ ಕಪ್ಪು ಬಣ್ಣದ ದಷ್ಟಪುಷ್ಟವಾಗಿದ್ದರೂ ಅವನ ದೇಹಕ್ಕೆ ವಿರುದ್ಧವಾಗಿಯೇ ಅವನ ಹೆಸರಿತ್ತು. ಅವನು ಶಾಲೆಗೆ ಬರುವ ದಾರಿಯಲ್ಲೇ ನಮ್ಮ ಮನೆ. ನನಗೂ ಒಬ್ಬನೆ ಶಾಲೆಗೆ ಹೋಗಲು ಭಯವಿದ್ದುದ್ದರಿಂದ ಅವನ ಕೊಳಕು ಬಟ್ಟೆ ಕಪ್ಪನೆ ಬಣ್ಣ, ಎಲ್ಲ ನನ್ನಲ್ಲಿ ಅವನ ಬಗ್ಗೆ ಮುಜುಗರ ತರಿಸಿದ್ದರೂ ವಿಧಿಯಿಲ್ಲದೆ ಅವನ ಗೆಳೆತನ ಮಾಡಿದೆ. ಅವನಿಗಿಂತ ನಾನು ಓದುವುದರಲ್ಲಿ ಎರಡು ವರ್ಷ ದೊಡ್ಡವನಗಿದ್ದ ಕಾರಣವೋ, ಏನೋ? ಅವನಿಗೆ ನನ್ನ ಮೇಲೆ ಗೌರವವಿತ್ತು. ನಾನು ಹೇಳಿದ  ಎಲ್ಲ ಕೆಲಸಗಳನ್ನು ಚಾಚೂ ತಪ್ಪದೆ ಮಾಡುತಿದ್ದ. ಅವನಿಗೆ ಕ್ಲಾಸ್ ಎಷ್ಟೇ ಬೇಗ ಬಿಟ್ಟರು ನನ್ನನ್ನು ಬಿಟ್ಟು ಎಂದೂ ಅವನು ಹಿಂತಿರುಗುತ್ತಿರಲಿಲ್ಲ.  ಮನೆಗೆ ಹೋಗುವಾಗ,ಬರುವಾಗ ಅವನಿಗೆ ಕಾಣುವ ಅಕ್ಕ ಪಕ್ಕದ ಯಾವ್ಯಾವುದೋ ಹಕ್ಕಿ,ಗಿಡಗಳನ್ನು ತೋರಿಸಿ ಏನೇನೋ ಹೇಳುತ್ತಿದ್ದ. ಆದರೆ ಅವನ ಮಾತು ನನಗೆ ಯಾವುವೂ ಹಿಡಿಸುತ್ತಿರಲಿಲ್ಲ. ಆದರೂ ಒಬ್ಬನೇ ಬರಲು ಭಯದ ಕಾರಣ ಅವನ ಮಾತುಗಳಿಗೆ ಊ…. ಗುಡುತ್ತಿದ್ದೆ.

ಸಣ್ಣಾಕಳನ  ಹಾಗೂ ಅಷ್ಟು ಚಿಕ್ಕ ವಯಸಿನಲ್ಲೇ ಅವನಲ್ಲಿದ್ದ ಪರಿಸರ ಜ್ಞಾನದ ಬಗ್ಗೆ  ನನಗೆ ಆಸಕ್ತಿ ಹುಟ್ಟಿಸಿದ್ದು ಅವನು ತೋರಿಸಿದ ಒಂದು ದುಂಬಿ...

ಒಂದು ದಿನ ಸಂಜೆ ನನಗೆ ಸ್ಪೆಷಲ್ ಕ್ಲಾಸ್ ತೆಗೆದುಕೊಂಡಿದ್ದರಿಂದ ಶಾಲೆ ಬಿಡುವುದು ತಡವಾಯಿತು ಯಥಾ ಪ್ರಕಾರ ನನಗಾಗಿ ಕಾಯುತ್ತಿದ್ದ ಸಣ್ಣಾಕಳನಿಗೆ ಕಾಯ್ದು ಕಾಯ್ದು  ಸುಸ್ತಾಗಿ ನಮ್ಮ ಶಾಲೆಯ ಪಕ್ಕ ಇರುವ ಸಣ್ಣ ಮಾವಿನ ತೋಪಿಗೆ ಒಬ್ಬನೇ ಆಡಲು ಹೋಗಿದ್ದ. ನನಗೆ ಕ್ಲಾಸ್ ಬಿಟ್ಟಾಗ ಅವನ್ನನ್ನು ಹುಡುಕಿ ಹುಡುಕಿ  ಸಾಕಾಗಿ ನಾನು ಆದಷ್ಟು ಧೈರ್ಯ ಮಾಡಿ "ನಾಳೆ ಸಿಗ್ಲಿ ಅವ್ನ" ಎಂದು ಬೈದುಕೊಳ್ಳುತ್ತಾ ಮನೆಯ ಕಡೆ ನಡೆದೆ.  ಬೆಳಗ್ಗೆ ನಮ್ಮ ಮನೆಯ ಬಳಿ ಬಂದಾಗ ಅವನಿಗೆ ಚೆನ್ನಾಗಿ ಬೈದೆ ಅದಕ್ಕೆ ಅವನು ಮಾವಿನ ತೋಪಿನಲ್ಲಿ ಆಡುತ್ತಿದ್ದೆ ಬಂದು ನೋಡೋ ಅಷ್ರಲ್ಲಿ ನೀನೇ ಇರ್ಲಿಲ್ಲ". ಎಂದ. “ ಸರಿ ಏತಕ್ಕೆ ಹೋಗಿದ್ದೇ ಆ ತೋಪ್ಗೆ". ಎಂದೆ. “ ಸುಮ್ನೆ ಹೋಗಿದ್ದೆ ಆದ್ರೆ ಲೋ ನೆನ್ನೆ  ಆ ತೋಪ್ನಲ್ಲಿ ನನಗೆ ಏನೋ ಸಿಕ್ತು!”. ಎಂದು ಅವನು ತನ್ನ ಬ್ಯಾಗಿನಿಂದ ಒಂದು ಬೆಂಕಿಪಟ್ಣ ತಗ್ದ ಅದರಲ್ಲಿ ಯಾವುದೋ ಹೊಳೆಯುವ ದುಂಬಿಯನ್ನು ತೋರಿಸಿದ.

“ಏನೋ ಅದು?”

“ಇದ ಕಕ್ಕೆ ದುಂಬಿ. ಈಗ ನೋಡು ಮಜ" ಎಂದು ಅವನ ಜೇಬಿನಿಂದ ಸಣ್ಣ ದಾರವನ್ನು ತೆಗೆದು ಅದರ ಕತ್ತಿನ ಸುತ್ತ ಕಟ್ಟಿ ತಿರುಗಿಸಿದ ಅದು ಗುಯ್ ಎಂದು ಹಾಡಲು ಪ್ರಾರಂಭಿಸಿತು. ನನಗಂತೂ ಅವನಿಗೆ  ವಿದ್ವಾನ್ ಬಿರುದನ್ನೇ ಕೊಡಬೇಕು ಇದಕ್ಕೆ ಎನ್ನಿಸಿತು. ನಾನು ಅವನ ಬಳಿ ಅದನ್ನು ತೆಗೆದುಕೊಂಡು ತಿರುಗಿಸಿ ತಿರುಗಿಸಿ ಅದರ ಅಭಿಮಾನಿಯೇ ಆಗಿಬಿಟ್ಟೆ.



“ಲೋ ಸಣ್ಣಾಕಳ ಇದನ್ನ ನನ್ಗೆ ಕೊಡೊ..” ಎಂದೆ

“ಅಷ್ಟೇನ ತಗೋ ಇಂತವು ನಾನು ಕುರಿಕಾಯಕೋದಗ ಬೆಜಾನ್ ಸಿಕ್ತವೆ" ಎಂದ.

ನನಗಂತೂ ವಜ್ರವೆ ಸಿಕ್ಕಂತಾಯಿತು ಇಂತವು ಇನ್ನು ಹೆಚ್ಚು ಇದ್ದರೆ ಚೆಂದ ಎಂದು

“ಇದರಿಂದ ಮರಿ ಮಾಡ್ಸಕ್ಕೆ ಆಗಲ್ವ?” ಎಂದೆ

“ಮಾಡ್ಸೋದು ನಾನು ಮಾಡ್ಸಿದಿನಿ.” ಎಂದ

“ಹೇಗೋ?”

“ಒಂದು ಬೆಂಕಿಪಟ್ಟದಲ್ಲಿ ಇದನ್ನ ಹಾಕು ಜೊತೆಗೆ ಕಕ್ಕೆ ಸೊಪ್ಪ ಹಾಕು ಆಗ ಇದು ಅದನ್ನೇ ತಿಂದು ಮೊಟ್ಟೆ ಇಡುತ್ತೆ."

“ಕಕ್ಕೆ ಸೊಪ್ಪ!? ಯಾವ್ದೊ ಅದು?”

“ನಾಳೆ ನಾನ್ ತಂದ್ ಕೊಡ್ತಿನಿ ಇದನ್ನ ನೀನೆ ಇಟ್ಕೊ ಸ್ಕೂಲ್ ಬಂತು.” ಎಂದು ದುಂಬಿಯನ್ನು ಅವ್ನು ತಂದಿದ್ದ ಬೆಂಕಿ ಪಟ್ನಕ್ಕೆ ಹಾಕಿ ಕೊಟ್ಟ. ಸಂಜೆ ಮನೆಗೆ ಬಂದ ನಾನು ಅದಕ್ಕೆ ಒಳ್ಳೆಯ ಜಾಗವನ್ನು ಹುಡುಕಿ ಇಟ್ಟೆ. ಅಂದಿನಿಂದ ನನಗೆ ದಿನಕ್ಕೆ ಹತ್ತು ಬಾರಿ ಬೆಂಕಿ ಪಟ್ಣ ನೋಡುವುದೆ ಕೆಲಸ. ಹೀಗೆ ಬೆಂಕಿಪೊಟ್ಟಣದಲ್ಲಿ ಇಟ್ಟಿದ್ದ ದುಂಬಿ ಕೆಲವು ದಿನಗಳ ನಂತರ ರಬ್ಬರಿನಂತಹ ಒಂದು ಮೊಟ್ಟೆಯನ್ನು ಇಟ್ಟಿತು. ದಿನಾ ಅದಕ್ಕೆ ಸಣ್ಣಾಕ ಕೊಡುತ್ತಿದ್ದ ಎಲೆಗಳನ್ನು ಹಾಕುತ್ತಿದ್ದೆ. ಚೆನ್ನಾಗಿ ತಿನ್ನುತ್ತಿದ್ದ ಅದು ಮಾಡುವ ಕಿರ್ ಕಿರ್ ಸದ್ದು ನನ್ನ ಕಿವಿಯಲ್ಲಿ ರಿಂಗಣಿಸುತ್ತಿದೆ. ಬೆಂಕಿಪಟ್ಟಣವನ್ನು ಹುಷಾರಾಗಿ ತೆಗೆದು ಎಲೆಗಳನ್ನು ಕೊಡುವಾಗ ಕೈಯ ಮೇಲೆ ಆ ದುಂಬಿಯನ್ನು ಬಿಟ್ಟುಕೊಂಡೆ. ಕ್ಷಣಾರ್ಧದಲ್ಲಿ ಪುರ್ರನೆ ಹಾರಿ ಗಗನದೆತ್ತರಕ್ಕೆ ತೇಲಿ ಹೋಯಿತು. ನನ್ನ ಕೈಯಲ್ಲಿ ಒಂದು ಮೊಟ್ಟೆಯನ್ನು ಇಟ್ಟು ಮರಿಮಾಡಿಸುವ ಕೆಲಸ ಕೊಟ್ಟು ಹಾರಿಹೋಗಿತ್ತು. ಬಾಲ್ಯದಲ್ಲೇ  ನನಗೆ ಕೀಟಲೋಕದ ಮಹಾದ್ವಾರವನ್ನು ತೆರೆದು ಅಪಾರ ಖುಷಿಗೆ ಕಾರಣವಾದ ಆ ಕಕ್ಕೆ ದುಂಬಿಯನ್ನು  ವಂದಿಸುತ್ತೇನೆ.

ಸೂರ್ಯನ ಬಿಸಿಲಿಗೆ ಆಭರಣದಂತೆ ಹೊಳೆಯುವ ಇದನ್ನು 'ಜುವೆಲ್ ಬೀಟಲ್ (Jewel beetle)' ಎಂದು ಕರೆಯುತ್ತಾರೆ. ಈ ದುಂಬಿಗಳು ಚಿಟ್ಟೆಗಳ ರೀತಿಯೇ ಮೊಟ್ಟೆ ಇಟ್ಟು ಹುಳುವಾಗಿ ಲಾರ್ವವಾಗಿ ಪ್ಯೂಪವಾಗಿ ದುಂಬಿಯಾಗುತ್ತವೆ.

- ನಾಗೇಶ್ o s



# ಖಾನಪುರದ ಹುಲಿಯೇ ನಿನ್ನ ಸಾವಿಗೆ ಕಂಬನಿ

*ನಿನ್ನ ಸಾವಿಗೆ ಮಾನವರಾದ ನಾವೇ ಕಾರಣ. ಕ್ಷಮಿಸು ಖಾನಪುರದ ಹುಲಿಯೇ!*

ಚಿಕ್ಕಮಗಳೂರಿನಲ್ಲಿ ದೊಂಬಿ ಎಬ್ಬಿಸಿದ ಹುಲಿಯನ್ನು ಪ್ರಜ್ಞೆ ತಪ್ಪಿಸುವ ಸೂಜಿಕೊಟ್ಟು, ಅಣಶಿ ಕಾಡಿಗೆ ಬಿಡಲು ಸಾಧ್ಯವಾಗದೆ, ಬೆಳಗಾವಿಯ ಖಾನಾಪುರದ ಕಾಡಿಗೆ ಬಿಟ್ಟಿದ್ದಾಯಿತು ! ಕೊನೆಗೆ ಅಲ್ಲಿನ ಹೆಣ್ಣು ಮಗಳೊಬ್ಬಳ ಜೀವವು ಹೋಯಿತು.ಹುಲಿಯೂ ಸತ್ತಿತು!

ಸೆರೆಯಿಡಿದ ಹುಲಿಯನ್ನು ಅದರ ನಿಜ ಸ್ವರೂಪ ವನ್ನು ಅರಿಯದೆ! ಯಾವುದೋ ಕಾಣದ ಕೈಗಳ ಚಕಮಕಿಗೆ ಮಣಿದು ನಡೆಸಿದ ಈ ಕಾರ್ಯಾಚರಣೆಯಿಂದ ಭಾರತ ಒಂದು ಹುಲಿಯನ್ನು ಕಳೆದು ಕೊಳ್ಳಬೇಕಾಯಿತು. ನರಭಕ್ಷಕವಾಗಿ ಪರಿಣಮಿಸಿದ ಹುಲಿಯನ್ನು ಸ್ಥಳಾಂತರ ಮಾಡಿದರೆ ಅದು ಸರಿದಾರಿಗೆ ಬರುತ್ತದೆ ಎಂದು ಹೇಗೆ ಈ ಹುಲಿ ತಜ್ಞರಿಗೆ ತಿಳಿಯಿತೊ ತಿಳಿಯದು. ಆದರೆ ಹುಲಿ ಬಲಿಯಾಯಿತು. ಮತ್ತೆ ಸುದ್ದಿಯಾಯಿತು! ನಾವು ನೀವು ಮಾತಾಡುತ್ತಿದ್ದೇವೆ . ಏನೋ ಸಂಕಟ ತೋಡಿಕೊಳ್ಳಬೇಕಾದ ಸ್ಥಿತಿ. ಮತ್ತೆ ಅದೇ ದಾರಿಯಲ್ಲಿ ನಡೆಯದೆ ಎಚ್ಚೆತ್ತುಕೊಂಡು ಪ್ರಾಣಿಗಳ ಹಕ್ಕುಗಳ ರಕ್ಷಣೆ ಮಾಡುವುದು ಹೇಗೆ? ಕರ್ನಾಟಕದಲ್ಲಿ ನರಭಕ್ಷಕ ಹುಲಿಗಳ ಕಾಟ ಹೆಚ್ಚಾಗಿ ಮಾನವ ವನ್ಯಜೀವಿ ಸಂಘರ್ಷ ಹೆಚ್ಚುತ್ತಿದೆ. ಕಳೆದ ತಿಂಗಳಲ್ಲಿ ಸಂಭವಿಸಿದ ದುರಂತಗಳನ್ನು ಗಮನಿಸೋಣ . ರಾಷ್ಟ್ರ ಪ್ರಾಣಿಯನ್ನು ಗುಂಡಿಕ್ಕಿ ಕೊಂದಿದ್ದಾಯಿತು. ಮೈಸೂರಿನ ಬಳಿ ಊರಿಗೆ ಬಂದ ಕರಡಿಯನ್ನು ಹಿಡಿದು ಪಾರ್ಕ್ ನ ಬೋನಿಗೆ ಹಾಕಿದ್ದಾಯಿತು. ಈ ಕಾಡಾನೆಗಳೋ ಕರಂಟಿಗೆ ಸಿಕ್ಕಿ ಸತ್ತಿವೆ . ಬಸುರಿ ಹೆಂಗಸನ್ನು ಕೊಂದು ತಿಂದ ನರಭಕ್ಷಕನಾದ ಹುಲಿ. ಹುಲಿ ಸಂರಕ್ಷಣೆಯಲ್ಲಿ ಮಾನವನ ಮಿಸ್ಟೇಕಿನಿಂದ ವಿಜ್ಞಾನ ಸೆಣಸುವಂತೆ ಆಗಿದೆ. ಹಳೆಕಾಲದ ಹುಲಿ ಶಿಕಾರಿಗೂ ಮಾಡ್ರನ್ ಯುಗದ ಹುಲಿ ಸಂರಕ್ಷಣೆಗೂ ವ್ಯತ್ಯಾಸ ಕಾಣುತ್ತಿಲ್ಲ . ಸತ್ತ ಹುಲಿಯ ಜೊತೆನಿಂತು ಪೋಸು ಕೊಡಲು ತಾ ಮುಂದು ನಾ ಮುಂದು ಎಂದು ಪೈಪೋಟಿ ಉಂಟಾದಂತಿದೆ. ಹುಲಿಗೆ ನಿಜವಾಗಿ ಯಾರು ಗುಂಡಿಕ್ಕಿದವರು ಯಾರು ಎಂದು ಗೊಂದಲಗಳೆದ್ದಿವೆ . ಸಂರಕ್ಷಣೆಗೆ ರಾಜಕೀಯ ಬೆರೆತರೆ ಉಂಟಾಗುವ ವರ್ಣ ವೈವಿಧ್ಯತೆಯಲ್ಲಿ ಕಾಡುಪ್ರಾಣಿಗಳಿಗೆ ಉಂಟಾಗುವ ದುರ್ಗತಿಗೆ ಖಾನಪುರದ ಹುಲಿಯ ಸಾವು ಒಂದು ನಿದರ್ಶನ .

- ರವಿ



# ನೇಸರನ ಮೋಡಗಳು

ಮಂಜಿನ ಮೋಡವ ಸರಿಸಿ
ಮೂಡಣದ ನೇಸರ ಇಣುಕಿದ
ಜೀವ ಚರಾಚರಗಳಿಗೆ ಬಿಸಿಲ ತಾಪ ನೀಡಿದ
ದೂರದ ಗಿರಿ ಶಿಖರದಿಂದ ಮೋಡಗಳನೇ ಹಂಚಿದ

ಸಾಗರಕೆ ನೀಲ ವರ್ಣ ಭಾನು ತಾ ನೀಡಿದ
ಅಲೆಗಳೊಡನೆ ತೂರಿ ಗಾಳಿ ಸೇರಿದ
ಕಾಡು-ಗಿರಿ ಸಸ್ಯರಾಶಿ ಬಾಷ್ಪದೊಡಲ ತುಂಬಿದ
ಮೋಡಗಳನೆ ಭುವಿಗೆ ನೀಡಿ ವಿಹರಿಸಲು ಕೇಳಿದ.

ಮುದುಡಿದೆಲೆಗೆ ಬೇಲಿ ಹೂವಿಗೆ
ಬರದ ನೆರಳ ಉತ್ತರಕ್ಕೆ ಮಿಂಚು ಗುಡುಗು ಸಿಡಿಸಿದ
ಮೋಡಗಳನೆ ಹನಿಯ ಮಾಡಿ ಜಲದ ಕಣ್ಣ ತುಂಬಿದ
ಕೆರೆಯು ತುಂಬಿ , ನಲಿವ ಮಿಗಕೆ ಚೈತನ್ಯವ ನೀಡಿದ

ಪಡುವಣದ ಮೋಡವೆಲ್ಲ ರಕ್ತ ವರ್ಣದೋಕುಳಿ
ಹಾರಿತಲ್ಲಿ ಚಂದಿರನೆಡೆಗೆ ರೆಕ್ಕೆಬಿಚ್ಚಿ ಚಿಟ್ಟೆಯು
ಬೆಳ್ಳಿಮೋಡ ರಚನೆಗೊಳ್ಳೆ ರಮ್ಯತೆಯನು ನೀಡಿದ
ತಾಯಿಯ ಗಾನದಂತೆ ನೆರಳ ಬೆಳಕು ಕೂಡಿದ



ಕೃಷ್ಣಾ ನಾಯಕ್



# ವನ್ಯ ವಿಜ್ಞಾನ 2.5 ಆನೇಕಲ್.

ಪರಿಸರ ಇಂದು ಅಳಿವಿನ ಅಂಚಿನಲ್ಲಿದೆ. ಅದನ್ನು ಉಳಿಸಿಕೊಳ್ಳುವುದು ಪ್ರತಿಯೊಬ್ಬರ ಆದ್ಯ ಕರ್ತವ್ಯ, ಅದು ನಮ್ಮ ಹಕ್ಕು ಕೂಡ. ಪ್ರಕೃತಿಯ ಬಗ್ಗೆ ಅರಿವು ಮೂಡಿಸುವ ಸದುದ್ದೇಶದಿಂದ ನಮ್ಮ ಕಾನನ ತಂಡ ಡಿಸೆಂಬರ್ 6 ಮತ್ತು 7 2014 ರಂದು ಆನೇಕಲ್ಲಿನ ಸುತ್ತಮುತ್ತಲಿನ ವಿದ್ಯಾರ್ಥಿ ಮತ್ತು ಯುವ ಸಮೂಹಕ್ಕಾಗಿ ವನ್ಯಜೀವಿ ಛಾಯಾಚಿತ್ರ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.

ಈ ಕಾರ್ಯಕ್ರಮವನ್ನು ಮ್ಯಾಂಚೆಸ್ಟರ್ ವಿಶ್ವವಿದ್ಯಾನಿಲಯದ ವಿಶ್ರಾಂತ ಪ್ರಾಧ್ಯಾಪಕರಾದ ಪ್ರೊ. ಟಿ . ಯಲ್ಲಾರೆಡ್ಡಿಯವರು ಉದ್ಘಾಟಿಸಿದರು. ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಉಪ ಸಂರಕ್ಷಣಾಧಿಕಾರಿ ಡಾ॥ ಸುನಿಲ್ ಪನ್ವಾರ್ ರವರು ಮಕ್ಕಳಿಗೆ ಪರಿಸರ ಸಂರಕ್ಷಣೆಯ ಬಗ್ಗೆ ಮನ ಮುಟ್ಟುವಂತೆ ತಿಳಿಸಿಕೊಟ್ಟರು . ಆನೇಕಲ್ ನಗರದ ಸುಮಾರು ಒಂದು ಸಾವಿರ ವಿದ್ಯಾರ್ಥಿಗಳು ಈ ಕಾರ್ಯಕ್ರಮದ ಉಪಯೋಗವನ್ನು ಪಡೆದುಕೊಂಡರು .

